## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1193 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 23-12-2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹೊಸದಾಗಿ ಸಿಎಲ್-6ಎ ಮತ್ತು ಸಿಎಲ್-7ಎ ಸನ್ನದುಗಳನ್ನು ಪಡೆಯಲು ಇರುವ ನಿಯಮಗಳು ಯಾವುವು; ಮತ್ತು ಇಲಾಖೆಯಿಂದ ವಿಧಿಸಲಾಗುವ ಸಾಮಾನ್ಯ ಷರತ್ತುಗಳು ಯಾವುವು; | ರಾಜ್ಯದಲ್ಲಿ ಈ ಕೆಳಕಂಡ ನಿಯಮಗಳನ್ನು ಪಾಲಿಸಿ ಹೊಸದಾಗಿ ಸಿಎಲ್-6ಎ ಮತ್ತು ಸಿಎಲ್-7ಎ ಸನ್ನದನ್ನು ನೀಡಲಾಗುತ್ತಿದೆ.<br>1) ಕರ್ನಾಟಕ ಅಬಕಾರಿ (ದೇಶಿ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು 1968 ರಡಿಯಲ್ಲಿನ ನಿಯಮಗಳಲ್ಲಿ ಅಗತ್ಯವಾಗಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಲಭ್ಯಗಳು ಮತ್ತು ಕರ್ನಾಟಕ ಅಬಕಾರಿ ಸನ್ನದುಗಳು (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು 1967 ರಲ್ಲಿನ ನಿಯಮಗಳಡಿ ರೂಪಿಸಿರುವ ನಿರ್ಬಂಧಗಳು.<br>2) ಸರ್ಕಾರದ ಆದೇಶ ಸಂಖ್ಯೆ:ಆಇ 36 ಇಡಬ್ಲ್ಯೂಪಿ 2018, ದಿನಾಂಕ:06-08-2020 ರಲ್ಲಿ 2011 ರ ಜನಗಣತಿಯನ್ವಯ 5000 ಅಥವಾ ಅದಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳ ಗ್ರಾಮ ಪಂಚಾಯತಿ/ಸ್ಥಳೀಯ ಪ್ರದೇಶಗಳ ವ್ಯಾಪ್ತಿಯಲ್ಲಿ ಹಾದು ಹೋಗುವ ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಗಳ ಇಕ್ಕೆಲಗಳಲ್ಲಿ ಹೊಸದಾಗಿ ಸಿಎಲ್-6ಎ ಮತ್ತು ಸಿಎಲ್-7 ಸನ್ನದುಗಳಿಗೆ ಮಾತ್ರ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5 |

| | | |
|---|---|---|
| | | ರಡಿಯಲ್ಲಿ ರಾಜ್ಯ ಮತ್ತು ರಾಷ್ಟ್ರೀಯ ಹೆದ್ದಾರಿಗಳಿಗೆ ಸಂಬಂಧಿಸಿದಂತೆ ವಿಧಿಸಿರುವ ನಿಬಂಧನೆಗಳನ್ನು ಹೊರತುಪಡಿಸಿ, ಇತರೆ ಷರತ್ತುಗಳನ್ನು ಪಾಲಿಸುವ ಷರತ್ತಿಗೊಳಪಟ್ಟು ನಿಯಮಾನುಸಾರ ಪ್ರಾರಂಭಿಸಲು ಸರ್ಕಾರ ಅನುಮತಿ ನೀಡಲಾಗಿರುತ್ತದೆ.<br>3) ಕರ್ನಾಟಕ ಅಬಕಾರಿ (ದೇಶಿ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು 1968 ರನ್ವಯ ಸಿಎಲ್–6ಎ ಸ್ಟಾರ್ ಹೋಟೆಲ್ ಸನ್ನದುಗಳನ್ನು ಜಿಲ್ಲಾಧಿಕಾರಿಗಳಿಂದ ಫಾರಂ–6ಎ ರಲ್ಲಿ ಮದ್ಯವನ್ನು ಹೊಂದುವಿಕೆ ಹಾಗೂ ಮಾರಾಟಕ್ಕಾಗಿ ನೀಡಲಾಗುತ್ತದೆ. ಸನ್ನದುದಾರರು ಸನ್ನದಿನಲ್ಲಿ ತಂಗಿರುವ ಗ್ರಾಹಕರುಗಳ ರೂಂಗೆ ಮದ್ಯವನ್ನು ನೀಡಬಹುದಾಗಿರುತ್ತದೆ. ಸಿಎಲ್–6ಎ ಸನ್ನದಿನಲ್ಲಿ ಒಂದಕ್ಕಿಂತ ಹೆಚ್ಚಿನ ಮದ್ಯದ ಕೌಂಟರ್ ಗಳನ್ನು ಜಿಲ್ಲಾಧಿಕಾರಿಗಳ ಅನುಮತಿಯೊಂದಿಗೆ ತೆರೆಯಬಹುದಾಗಿರುತ್ತದೆ. ಸ್ಟಾರ್ ಹೋಟೆಲ್ ಅಂದರೆ ಸಿಎಲ್–6ಎ ಸನ್ನದು ಭಾರತ ಸರ್ಕಾರದ ಪ್ರವಾಸೋದ್ಯಮ ಸಚಿವಾಲಯದಿಂದ ಮಾನ್ಯತೆ ಪಡೆದಿರಬೇಕಾಗಿರುತ್ತದೆ.<br>4) ಕರ್ನಾಟಕ ಅಬಕಾರಿ (ದೇಶಿ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು 1968 ರನ್ವಯ ಅಬಕಾರಿ ನಿಯಮಗಳ ಪ್ರಕಾರ ಸಿಎಲ್(7–ಎ) ಸನ್ನದನ್ನು ರಾಜ್ಯ ಇಲ್ಲವೇ ಕೇಂದ್ರ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತ ಸಂಸ್ಥೆಗಳಿಗೆ ಮಾತ್ರ ನೀಡಲು ಅವಕಾಶವಿರುತ್ತದೆ. ಸಿಎಲ್(7–ಎ) ಟೂರಿಸ್ಟ್ ಹೋಟೆಲ್ ಸನ್ನದುಗಳನ್ನು ಜಿಲ್ಲಾಧಿಕಾರಿಗಳು ಫಾರಂ–ಸಿಎಲ್14 ರಲ್ಲಿ ಮದ್ಯವನ್ನು ಹೊಂದುವಿಕೆ ಹಾಗೂ ಮಾರಾಟಕ್ಕಾಗಿ ನೀಡಲಾಗುತ್ತಿದೆ. |
| ಆ) | ಸರ್ಕಾರದಿಂದ ಹೊಸದಾಗಿ ಸಿಎಲ್–6ಎ ಮತ್ತು ಸಿಎಲ್–7ಎ ಸನ್ನದುಗಳನ್ನು ಪಡೆಯಲು | ಸರ್ಕಾರದಿಂದ ಹೊಸದಾಗಿ ಸಿಎಲ್–6ಎ ಮತ್ತು ಸಿಎಲ್–7ಎ ಸನ್ನದುಗಳನ್ನು ಪಡೆಯಲು ಕರ್ನಾಟಕ ಅಬಕಾರಿ (ಸನ್ನದುಗಳ |

| | | |
|---|---|---|
| | ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು 1967ರ ನಿಯಮ 5 ಕ್ಕೆ ತಿದ್ದುಪಡಿಯನ್ನು ತರಲಾಗಿದೆಯೇ; ಈ ಕುರಿತು ಕರಡು ಪ್ರತಿಯನ್ನು ಹೊರಡಿಸಿ ಆಕ್ಷೇಪಣೆಯನ್ನು ಆಹ್ವಾನಿಸಲಾಗಿದೆಯೇ; (ಹೌದಾದಲ್ಲಿ ಕರಡು ಪ್ರತಿಯನ್ನು ಒದಗಿಸುವುದು) | ಸಾಮಾನ್ಯ ಷರತ್ತುಗಳು) ನಿಯಮಗಳು 1967ರ ನಿಯಮ 5 ಕ್ಕೆ ತಿದ್ದುಪಡಿ ತಂದಿರುವುದಿಲ್ಲ ಹಾಗೂ ಕರಡು ಪ್ರತಿಯನ್ನು ಹೊರಡಿಸಿರುವುದಿಲ್ಲ. |
| ಇ) | ಈ ನಿಯಮಕ್ಕೆ ತಿದ್ದುಪಡಿಯನ್ನು ತರದೇ ಸಿಎಲ್-6ಎ, ಮತ್ತು ಸಿಎಲ್-7ಎ ಸನ್ನದುಗಳನ್ನು ನೀಡಲಾಗಿದೆಯೇ; ಹೌದಾದಲ್ಲಿ, ಯಾವ ಆಧಾರದ ಮೇಲೆ ನೀಡಲಾಗಿದೆ; | ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ:23.02.2018ರ ತೀರ್ಪಿನಲ್ಲಿ ನೀಡಿರುವ ನಿರ್ದೇಶನದಂತೆ Urban Agglomeration ಇರುವ ಸಾಮಿಪ್ಯ ಮತ್ತು ಸಾಕಷ್ಟು ಅಭಿವೃದ್ಧಿ ಈ ಎರಡು ಮಾನದಂಡಗಳ ಅನುಸಾರ ಆಯಾ ರಾಜ್ಯ ಸರ್ಕಾರಗಳು ಕ್ರಮ ಕೈಗೊಳ್ಳುವಂತೆ ಸೂಚಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಪತ್ರ ಸಂಖ್ಯೆ:ಆಇ 36 ಇಡಬ್ಲ್ಯೂಪಿ 2018, ದಿನಾಂಕ:31.08.2018ರಲ್ಲಿ "ಸಾಕಷ್ಟು ಅಭಿವೃದ್ಧಿ" ಪರಿಭಾಷೆಯಲ್ಲಿ 2011ರ ಜನಗಣತಿಯನ್ವಯ 5,000ಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಸನ್ನದುಗಳಿಗೆ ವಿನಾಯಿತಿಯನ್ನು ನೀಡಲಾಗಿರುತ್ತದೆ.<br><br>ಮುಂದುವರೆದು, ಸರ್ಕಾರದ ಪತ್ರ ಸಂಖ್ಯೆ:ಆಇ 36 ಇಡಬ್ಲ್ಯೂಪಿ 2018, ದಿನಾಂಕ:06.08.2020ರಲ್ಲಿ 2011 ರ ಜನಗಣತಿಯನ್ವಯ 5000 ಅಥವಾ ಅದಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳ ಗ್ರಾಮ ಪಂಚಾಯತಿ/ಸ್ಥಳೀಯ ಪ್ರದೇಶಗಳ ವ್ಯಾಪ್ತಿಯಲ್ಲಿ ಹಾದು ಹೋಗುವ ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಗಳ ಇಕ್ಕೆಲಗಳಲ್ಲಿ ಹೊಸದಾಗಿ ಸಿಎಲ್-6ಎ ಮತ್ತು ಸಿಎಲ್-7 ಸನ್ನದುಗಳಿಗೆ ಮಾತ್ರ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5 ರಡಿಯಲ್ಲಿ ರಾಜ್ಯ ಮತ್ತು ರಾಷ್ಟ್ರೀಯ ಹೆದ್ದಾರಿಗಳಿಗೆ ಸಂಬಂಧಿಸಿದಂತೆ ವಿಧಿಸಿರುವ ನಿಬಂಧನೆಗಳನ್ನು ಹೊರತುಪಡಿಸಿ, ಇತರೆ ಷರತ್ತುಗಳನ್ನು ಪಾಲಿಸುವ ಷರತ್ತಿಗೊಳಪಟ್ಟು ನಿಯಮಾನುಸಾರ ಪ್ರಾರಂಭಿಸಲು ಅನುಮತಿಯನ್ನು ನೀಡಲಾಗಿರುತ್ತದೆ. |

| | | |
|---|---|---|
| ಈ) | ಉಡುಪಿ ಜಿಲ್ಲೆಯಲ್ಲಿರುವ ಸಿಎಲ್-6ಎ, ಮತ್ತು ಸಿಎಲ್-7ಎ ಸನ್ನದುದಾರರ ಸಂಖ್ಯೆ ಎಷ್ಟು; ಕಳೆದ 2 ವರ್ಷಗಳಿಂದ ಹೊಸದಾಗಿ ನೀಡಲಾದ ಸಿಎಲ್-6ಎ, ಮತ್ತು ಸಿಎಲ್-7ಎ ಸನ್ನದುದಾರರ ಸಂಖ್ಯೆ ಎಷ್ಟು? (ಸನ್ನದುದಾರುವಾರು ತಾಲ್ಲೂಕುವಾರು ವಿವರ ನೀಡುವುದು) | ಉಡುಪಿ ಜಿಲ್ಲೆಯಲ್ಲಿ ಇಂದಿನವರೆವಿಗೂ ಯಾವುದೇ ಸಿಎಲ್-6ಎ ಮತ್ತು ಸಿಎಲ್-7ಎ ಸನ್ನದು ಮಂಜೂರಾಗಿರುವುದಿಲ್ಲ. |

ಆಇ 142 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು